ವೈ. ಚರೂಷಿನ್

# ಯಾರ ಬದುಕು ಹೇಗೆ?





# ಆನೆ

ಆನೆಗಳು ರಷ್ಯದ ಕಾಡುಗಳಲ್ಲಿ ಕಾಣಬರವು. ಅವು ಆಫ್ರಿಕದ ಮೈದಾನಗಳಲ್ಲೂ ಭಾರತದ ಕಾಡುಗಳಲ್ಲೂ ವಾಸಿಸುತ್ತವೆ.

ಸೊಂಡಿಲನ್ನೇ ತೋಳಿನಂತೆ ಬಳಸಿಕೊಂಡು ಆನೆಗಳು ಗಿಡಗಳನ್ನೂ ಕೊಂಬೆಗಳನ್ನೂ ಮುರಿಯುತ್ತವೆ. ನದಿಗೆ ಬಂದಾಗ ಆನೆ ಸೊಂಡಿಲಿನಲ್ಲಿ ನೀರು ತುಂಬಿಕೊಂಡು ಧೂಳು ಕೊಳೆ ಹೋಗಲಾಡಿಸಿಕೊಳ್ಳಲೋಸುಗ ಮೈ ಮೇಲೆ ಸಿಂಪಡಿಸಿಕೊಳ್ಳುತ್ತದೆ.

ಆನೆಗೆ ಶತ್ರುಗಳಿಲ್ಲ. ಎಲ್ಲರೂ ಈ ದೈತ್ಯಾಕಾರದ ಪ್ರಾಣಿಗೆ ಅಂಜುತ್ತಾರೆ.

ಪಳಗಿಸಿದಾಗ ಆನೆ ಬಹಳ ಪ್ರಯೋಜನಕಾರಿ. ಅತ್ಯಂತ ಶ್ರಮದ ಕೆಲಸಗಳನ್ನೂ ಮಾಡಬಲ್ಲುದು. ಮಕ್ಕಳನ್ನು ನೋಡಿಕೊಳ್ಳುವುದನ್ನೂ ಕಲಿಯಬಲ್ಲುದು.



# ಹುಲಿ

ಹುಲಿ ಅತಿಧೈರ್ಯದ ಭಯಂಕರ ಪ್ರಾಣಿ. ಇದು ಕಾಡುಗಳಲ್ಲಿ ಪೊದೆಗಳ ಕೆಳಗೆ ಅಡಗಿ ಕುಳಿತಿರುತ್ತೆ. ಬಹುವೇಳೆ ಜಿಂಕೆಗಳೂ ಎಮ್ಮೆಗಳೂ ಕಾಡುಹಂದಿಗಳೂ ನೀರು ಕುಡಿಯಲು ಹೋಗುವ ಮಾರ್ಗಗಳಲ್ಲಿ ಹುಲಿ ತಾಳ್ಮೆಯಿಂದ ತನ್ನ ಬಲಿಗಾಗಿ ಹೊಂಚುಹಾಕಿ ಕುಳಿತಿರುತ್ತೆ.

ಇತರ ಪ್ರಾಣಿಗಳು ಹುಲಿಗೆ ಹೆದರುತ್ತವೆ. ಮನುಷ್ಯರೂ ಅಷ್ಟೆ. ಆಯುಧ ಇಲ್ಲದಿದ್ದರೆ ಹುಲಿ ಮನುಷ್ಯನಿಗೂ ಅಪಾಯಕಾರಿಯೇ.



# ಸಿಂಹ

ಆಫ್ರಿಕದ ಹುಲ್ಲುಗಾಡುಗಳಲ್ಲಿ ಕತ್ತಲು ಕವಿಯ ತೊಡಗಿದಾಗ ಎಲ್ಲ ಪಕ್ಕಗಳಿಂದಲೂ ನಾನಾ ರೀತಿಯ ವಿಚಿತ್ರ ಶಬ್ದಗಳು ಕೇಳಿಬರುತ್ತವೆಂದು ವಿಹಾರಿಗಳು ವರದಿಮಾಡುತ್ತಾರೆ. ಕತ್ತೆಕಿರುಬಗಳು ಭೀಕರವಾಗಿ ನಗುತ್ತಿರುತ್ತವೆ, ಗುಳ್ಳೆನರಿಗಳು ಅರಚುತ್ತಿರುತ್ತವೆ.

ಆಗ ಇದ್ದಕ್ಕಿದ್ದಂತೆ ಸಿಂಹದ ಗರ್ಜನೆ ಕೇಳಿ ಬರುತ್ತೆ. ಅದು ಗುಡುಗಿನಂತೆ ಮೊಳಗುತ್ತೆ. ಸಿಂಹವು ಬೇಟೆಯಾಡಲು ಹೊರಬಂದಿದೆ.

ಅದರ ಗರ್ಜನೆಯನ್ನು ಕೇಳಿ ಕತ್ತೆಕಿರುಬವೂ ಕಾಡು ಹಂದಿಯೂ ಮರೆಯಾದ ಸ್ಥಳಗಳಿಗೆ ಧಾವಿಸುತ್ತವೆ. ಸೀಬ್ರಗಳೂ ಜಿಂಕೆಗಳೂ ಓಡುತ್ತವೆ. ಸಿಂಹದ ಪ್ರಬಲ ವಾದ ಪಂಜಗಳಲ್ಲಿ ಸಿಕ್ಕಿ ಬೀಳಲು ಯಾವ ಪ್ರಾಣಿ ಗಳಿಗೂ ಇಷ್ಟವಿಲ್ಲ.



# ಒಂಟೆ

ಒಂಟೆಯು ಪಾದಗಳು ಮರಳಿನಲ್ಲಿ ಹೂತು ಹೋಗುವುದಿಲ್ಲ. ಅಲ್ಲದೆ ಅದು ಏನನ್ನೂ ತಿನ್ನದೆ ಕುಡಿಯದೆ ತುಂಬ ಕಾಲ ಇರಬಲ್ಲುದು. ಮರಳು ಗಾಡಿನಲ್ಲಿ ಸಿಹಿಯಾದ ರುಚಿಯಾದ ಹುಲ್ಲುಗಳಾಗಲೀ ಎಲೆಗಳಿಂದ ತುಂಬಿದ ಗಿಡಮರಗಳಾಗಲೀ ಎಲ್ಲಿ ಬರಬೇಕು. ಬಾವಿಗಳಿರುವುದು ದೂರ ದೂರ, ಅಲ್ಲೊಂದು ಇಲ್ಲೊಂದು.

ರಸ್ತೆಗಳು ಚೆನ್ನಾಗಿರದೆ ಕಾರಿನಲ್ಲಾಗಲೀ ಕುದುರೆ ಗಾಡಿಗಳಲ್ಲಾಗಲೀ ಹೋಗಲು ಸಾಧ್ಯವಿಲ್ಲದಿದ್ದಾಗ ಒಂಟೆಯು ಮನುಷ್ಯನಿಗೆ ಅತ್ಯುತ್ತಮು ಅತ್ಯಂತ ವಿಶ್ವಾಸೀ ಮಿತ್ರನಾಗಿ ಸಹಾಯಕ್ಕೆ ಬರುತ್ತದೆ.



# ಸೀಬ್ರ

ಆಫ್ರಿಕದಾದ್ಯಂತ ಮೈದಾನಗಳಲ್ಲಿ ಪುಟ್ಟ ಆಕೃತಿಯ ಕುದುರೆಗಳ ಹಿಂಡುಗಳು ಚುರುಕಾಗಿ ಬೆಡಗಿನೊಂದಿಗೆ ಓಡಾಡುತ್ತಿರುತ್ತವೆ.

ಇವೇ ಸೀಬ್ರಗಳು. ಇವು ಸಾಮಾನ್ಯ ಕುದುರೆಗಳಂತಲ್ಲ. ಇವಕ್ಕೆ ಮೈ ಮೇಲೆ ಪಟ್ಟೆಗಳಿರುತ್ತವೆ. ಕುತ್ತಿಗೆಯ ಮೇಲಿನ ಕೂದಲು ಮೊಂಡಾಗಿರುತ್ತೆ. ಗೊಂಚಲು ಇರುವುದಿಲ್ಲ.

ಸೀಬ್ರ ಒಂದು ಉನ್ಮತ್ತ ಕಾಡುಪ್ರಾಣಿ. ಬೆಳೆದ ಸೀಬ್ರವನ್ನು ಪಳಗಿಸಲು ಸಾಕಷ್ಟು ಕಾಲ ಯತ್ನ ಅವಶ್ಯ. ಆದರೆ ಎಳೆಯ ಸೀಬ್ರಗಳು ಜನರನ್ನು ನಂಬುತ್ತವೆ.

ಆಫ್ರಿಕದಲ್ಲಿ ಇವುಗಳನ್ನು ಅಂಚೆಗಾಡಿಗಳನ್ನು ಎಳೆಯಲು ಉಪಯೋಗಿಸಲಾಗುತ್ತೆ.



# ಕರಡಿ

ಚಳಿಗಾಲದಾದ್ಯಂತ ಕರಡಿ ಕಾಡಿನಲ್ಲಿ ತನ್ನ ಗವಿಯಲ್ಲೇ ತನ್ನ ಪಾದಗಳನ್ನು ನೆಕ್ಕಿಕೊಳ್ಳುತ್ತ ಮಲಗಿರುತ್ತೆ. ಆದರೆ ಸೂರ್ಯ ಹಿಮವನ್ನು ಕರಗಿಸತೊಡಗಿದ ಕೂಡಲೇ ಅದು ಎದ್ದು ಹೊರಬರುತ್ತೆ, ಆಹಾರಕ್ಕಾಗಿ ಹುಡುಕಿಕೊಂಡು ಹೊರಡುತ್ತೆ.

ಕಳೆದ ಬೇಸಿಗೆಯಲ್ಲಿ ಬೆರ್ರಿ ಹಣ್ಣುಗಳಿಗಾಗಿ ಹುಡುಕುತ್ತಿದ್ದಾಗ, ಬೇರುಗಳಿಗಾಗಿ ನೆಲವನ್ನು ಅಗೆಯುತ್ತಿದ್ದಾಗ, ಅದು ಮರದ ಪೊಟರೆಯೊಂದರಿಂದ ಕೆಲವು ಜೇನು ನೊಣಗಳು ಹೊರಬರುತ್ತಿದ್ದುದನ್ನು ಕಂಡಿದ್ದಿತಲ್ಲವೇ.

ಜೇನು ತುಪ್ಪವನ್ನು ಕುಡಿಯುವ ತವಕದಿಂದ ಕರಡಿ ಮರವನ್ನು ಹತ್ತಿ ತನ್ನ ಪಾದಗಳನ್ನೂ ತಲೆಯನ್ನೂ ಪೊಟರೆಯೊಳಕ್ಕೆ ಹಾಕುತ್ತೆ. ಆದರೆ ಜೇನು ನೊಣಗಳು ಅದಕ್ಕೆ ಅಷ್ಟು ಸುಲಭವಾಗಿ ಜೇನು ತುಪ್ಪ ತೆಗೆದುಕೊಳ್ಳಲು ಬಿಡವು. ಅವು ಅದನ್ನು ಕಚ್ಚಿ ಹೊರಗಟ್ಟುತ್ತವೆ. ನೋವಿನಿಂದ ಗಟ್ಟಿಯಾಗಿ ನರಳುತ್ತ ಅದು ನೆಲದ ಮೇಲೆ ಬೀಳುತ್ತೆ. ಬೇರೆ ಆಹಾರ ಹುಡುಕಿಕೊಂಡು ಹೊರಡುತ್ತೆ.



# ತೋಳ

ಬೇಸಿಗೆಯಲ್ಲಿ ತೋಳಕ್ಕೆ ಉಪವಾಸ ಬೀಳುವ ಹೆದರಿಕೆ ಇಲ್ಲ. ತಿನ್ನಲು ಬೇಕಾದಷ್ಟು ಆಹಾರವಿರುತ್ತೆ.

ಚಳಿಗಾಲ ಬಂದಾಗ ಹಕ್ಕಿಗಳು ಬೆಚ್ಚಗಿನ ಪ್ರದೇಶ ಗಳಿಗೆ ಹಾರಿ ಹೋಗುತ್ತವೆ, ಪ್ರಾಣಿಗಳು ಬಿಲಗಳಲ್ಲಿ ಅಡಗಿಕೊಳ್ಳುತ್ತವೆ, ಆಗ ತೋಳನಿಗೆ ತಿನ್ನಲು ಏನೂ ಇರುವುದಿಲ್ಲ. ಅದು ಆಹಾರವನ್ನು ಹುಡುಕಿಕೊಂಡು, ಹಸಿವಿನಿಂದ ಕಂಗಾಲಾಗಿ ಅಡ್ಡಾಡುತ್ತಿರುತ್ತೆ. ಹಳ್ಳಿಗೂ ಬಂದು ಬಿಡುತ್ತೆ... ಕಾವಲುಗಾರ ಎಚ್ಚರದಿಂದ ಇರದಿದ್ದರೆ, ಬಾಗಿಲ ಚಿಲುಕಗಳು ಭದ್ರವಾಗಿರದಿದ್ದರೆ, ಕುರಿಗಳಿಗೆ ಅಪಾಯ ತಪ್ಪದು.



# ಮೊಲ

ಮೊಲ ವೇಗವಾಗಿ ಓಡುತ್ತೆ. ಪ್ರತಿಯೊಂದು ನಾಯಿಯೂ ಅದನ್ನು ಹಿಂದೆ ಹಾಕದು ಬೇಟೆಗಾರ ರಿಗೆ ಕಾಣದಂತೆ ಅದು ಸಾಮಾನ್ಯವಾಗಿ ಪೊದೆಗಳ ಕೆಳಗೆ ಮಲಗಿರುತ್ತೆ. ಆಹಾರ ಬೇಕಾದಾಗ ಕಾಡಿನಿಂದ ಹೊಲಕ್ಕೆ ಕುಪ್ಪಳಿಸಿಕೊಂಡು ಬರುತ್ತೆ.

ತೋಟಗಾರರೇ, ಮೊಲವನ್ನು ತೋಟದೊಳಕ್ಕೆ ಬರಲು ಬಿಡಬೇಡಿ. ಅದು ಸೇಬು ಹಾಗೂ ಚೆರ್ರಿ ಗಿಡಗಳ ತೊಗಟೆಯನ್ನು ಕಡಿದು ಕಿತ್ತು ಹಾಕಿಬಿಡುತ್ತೆ.



# ಅಳಿಲು

ಅಳಿಲಿಗೆ ಚಳಿಯ ಭಯವಿಲ್ಲ. ಅದರ ಮೈ ಮೇಲೆ ಬೆಚ್ಚಗಿನ ತುಪ್ಪುಳದ ಹೊದಿಕೆ ಇರುತ್ತೆ.

ಬೇಸಿಗೆ ಬರುತ್ತೆ, ಅಳಿಲು ತನ್ನ ಮೈ ಮೇಲಿನ ಹೊದಿಕೆಯನ್ನು ಬದಲಿಸಿಕೊಳ್ಳುತ್ತೆ. ಈಗ ಅದಕ್ಕೆ ಚಳಿಯೂ ಇಲ್ಲ, ಯಾರಿಂದಲೂ ಕಣ್ಮರೆಯಾಗಿರಲೂ ಬೇಕಿಲ್ಲ – ಬೇಟೆಗಾರರಿಗೆ ಅದರ ತೆಳುವಾದ ಕೆಂಗೂದಲ ತುಪ್ಪುಳ ಬೇಕಿಲ್ಲ.

ಅಳಿಲು ನಾಯಿಕೊಡೆಗಳನ್ನು ಒಣಗಿಸಿಕೊಂಡು ತಿನ್ನುತ್ತೆ, ಫರ್ ಮರದ ಕಾಯನ್ನು ಸುಲಿದು ತಿನ್ನುತ್ತೆ.

ಅನುವಾದ: ಕೆ. ಎಲ್. ಗೋಪಾಲಕೃಷ್ಣರಾವ್

Е. Чарушин
КТО КАК ЖИВЕТ
*На языке каннада*

Y. Charushin
HOW THEY LIVE
*In Kannada*











ಎರಡನೆಯ ಮುದ್ರಣ ರಾದುಗ ಪ್ರಕಾಶನ 1987

ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾದುದು





ರಾದುಗ ಪ್ರಕಾಶನ
ಮಾಸ್ಕೋ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು





ISBN 5-05-007866-8